# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1260
ಉತ್ತರಿಸಬೇಕಾದ ದಿನಾಂಕ : 21.12.2018.
ಸದಸ್ಯರ ಹೆಸರು : ಶ್ರೀ ಐವನ್ ಡಿ'ಸೋಜಾ (ನಾಮ ನಿರ್ದೇಶನ ಹೊಂದಿದವರು)
ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ) | ಕ್ರೀಡಾ ವಿಶ್ವವಿದ್ಯಾನಿಲಯ ಪ್ರಾರಂಭಿಸಬೇಕೆಂಬ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ರಾಜ್ಯದಲ್ಲಿ ಕ್ರೀಡಾ ವಿಶ್ವವಿದ್ಯಾನಿಲಯ ಪ್ರಾರಂಭಿಸಿದಲ್ಲಿ ಕ್ರೀಡಾ ಕಾಲೇಜುಗಳನ್ನು ಪ್ರಾರಂಭಿಸಲು ಅನುಮತಿ ನೀಡಲಾಗುತ್ತದೆಯೇ; ಈ ಬಗ್ಗೆ ಸರ್ಕಾರದ ಮುಂದಿರುವ ಪ್ರಸ್ತಾವನೆಗಳೇನು; | ಹೌದು. ಕ್ರೀಡಾ ವಿಶ್ವವಿದ್ಯಾಲಯವನ್ನು ಪ್ರಾರಂಭಿಸುವ ಬಗ್ಗೆ ವಿಸ್ತೃತ ಯೋಜನಾ ವರದಿಯನ್ನು ಸಿದ್ಧಪಡಿಸಲಾಗುತ್ತಿದ್ದು, ಯೋಜನಾ ವರದಿಯನ್ನು ಆಧರಿಸಿ, ಸೂಕ್ತ ತೀರ್ಮಾನವನ್ನು ಕೈಗೊಳ್ಳಲಾಗುವುದು. |
| ಆ) | ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಮತ್ತು ತಾಲ್ಲೂಕುಗಳಲ್ಲಿ ಸಿಂಥೆಟಿಕ್ ಟ್ರ್ಯಾಕ್‌ಗಳನ್ನು ರಚಿಸಲು ಸರ್ಕಾರದ ಮುಂದೆ ಪ್ರಸ್ತಾವನೆ ಇದೆಯೇ; ಪ್ರಸ್ತುತ, ರಾಜ್ಯದ ಯಾವೆಲ್ಲಾ ಜಿಲ್ಲೆಗಳಲ್ಲಿ ಸಿಂಥೆಟಿಕ್ ಟ್ರ್ಯಾಕ್‌ಗಳನ್ನು ಅಳವಡಿಸಲಾಗಿದೆ; (ವಿವರ ಒದಗಿಸುವುದು) | ರಾಜ್ಯದ ಒಟ್ಟು 15 ಕ್ರೀಡಾಂಗಣಗಳಲ್ಲಿ ಸಿಂಥೆಟಿಕ್ ಅಥ್ಲೆಟಿಕ್ಸ್ ಟ್ರ್ಯಾಕ್‌ಗಳನ್ನು ಅಳವಡಿಸಲಾಗಿದ್ದು, ವಿವರ ಈ ಕೆಳಕಂಡಂತಿದೆ. (ಕೆಳಗಿನ ಪಟ್ಟಿ ನೋಡಿ) |

| ಕ್ರಸ | ಜಿಲ್ಲೆಯ ಹೆಸರು | ಸ್ಥಳ |
|---|---|---|
| | ಬೆಂಗಳೂರು ನಗರ | ಶ್ರೀ ಕಂಠೀರವ ಕ್ರೀಡಾಂಗಣ |
| 2. | ಬೆಂಗಳೂರು ನಗರ | ಕ್ರೀಡಾ ವಸತಿ ಶಾಲೆ, ವಿದ್ಯಾನಗರ |
| 3. | ಬೆಳಗಾವಿ | ಜಿಲ್ಲಾ ಕ್ರೀಡಾಂಗಣ, ಬೆಳಗಾವಿ |
| 4. | ಚಿತ್ರದುರ್ಗ | ಜಿಲ್ಲಾ ಕ್ರೀಡಾಂಗಣ, ಚಿತ್ರದುರ್ಗ |
| 5. | ಚಿತ್ರದುರ್ಗ | ತಾಲ್ಲೂಕು ಕ್ರೀಡಾಂಗಣ, ಹೊಸದುರ್ಗ |
| 6. | ದಕ್ಷಿಣ ಕನ್ನಡ | ಜಿಲ್ಲಾ ಕ್ರೀಡಾಂಗಣ, ಮಂಗಳೂರು |
| 7. | ದಕ್ಷಿಣ ಕನ್ನಡ | ಮೂಡುಬಿದಿರೆ |
| 8. | ಧಾರವಾಡ | ಜಿಲ್ಲಾ ಕ್ರೀಡಾಂಗಣ, ಧಾರವಾಡ |
| 9. | ಗದಗ | ಜಿಲ್ಲಾ ಕ್ರೀಡಾಂಗಣ, ಗದಗ |
| 10. | ಕಲಬುರಗಿ | ಜಿಲ್ಲಾ ಕ್ರೀಡಾಂಗಣ, ಕಲಬುರಗಿ |
| 11. | ಕೊಡಗು | ಕ್ರೀಡಾ ವಸತಿ ಶಾಲೆ, ಕೂಡಿಗೆ |
| 12. | ಮೈಸೂರು | ಜಿಲ್ಲಾ ಕ್ರೀಡಾಂಗಣ, ಮೈಸೂರು |
| 13. | ಶಿವಮೊಗ್ಗ | ಜಿಲ್ಲಾ ಕ್ರೀಡಾಂಗಣ, ಶಿವಮೊಗ್ಗ |
| 14. | ಉಡುಪಿ | ಜಿಲ್ಲಾ ಕ್ರೀಡಾಂಗಣ, ಉಡುಪಿ |
| 15. | ಚಾಮರಾಜನಗರ | ಜಿಲ್ಲಾ ಕ್ರೀಡಾಂಗಣ, ಚಾಮರಾಜನಗರ |

ಇತರೆ ಎಲ್ಲಾ ಜಿಲ್ಲೆಗಳಲ್ಲಿ ಹಾಗೂ ತಾಲ್ಲೂಕುಗಳಲ್ಲಿ ಸಿಂಥೆಟಿಕ್ ಅಥ್ಲೆಟಿಕ್ ಟ್ರ್ಯಾಕ್ ಅಳವಡಿಸುವ ಬಗ್ಗೆ ಅವಶ್ಯಕತೆ ಹಾಗೂ ಅನುದಾನದ ಲಭ್ಯತೆ ಆಧರಿಸಿ, ಪರಿಗಣಿಸಲಾಗುವುದು.

| | | |
|---|---|---|
| ಇ) | ಮಂಗಳೂರಿನ ಉರ್ವ ಮಾರ್ಕೆಟ್ ಬಳಿ ಮಲ್ಟಿಸ್ಪೋರ್ಟ್ಸ್ ಕಾಂಪ್ಲೆಕ್ಸ್ ಸ್ಥಾಪಿಸಲು ಸರ್ಕಾರ ಎಷ್ಟು ಅನುದಾನ ಮೀಸಲಿಟ್ಟಿದೆ; ಕಾಮಗಾರಿ ಯಾವಾಗ ಪ್ರಾರಂಭವಾಗುತ್ತದೆ; (ವಿವರ ಒದಗಿಸುವುದು) | ಮಂಗಳೂರಿನ ಉರ್ವ ಮಾರ್ಕೆಟ್ ಬಳಿ ಮಲ್ಟಿಸ್ಪೋರ್ಟ್ಸ್ ಕಾಂಪ್ಲೆಕ್ಸ್ ಸ್ಥಾಪಿಸಲು 2018-19ನೇ ಸಾಲಿನಲ್ಲಿ ಯಾವುದೇ ಅನುದಾನವನ್ನು ಮೀಸಲಿಟ್ಟಿರುವುದಿಲ್ಲ. ಸದರಿ ಕಾಮಗಾರಿಗೆ ಸಂಬಂಧಿಸಿದಂತೆ ಅನುದಾನದ ಲಭ್ಯತೆ ಆಧರಿಸಿ, ಕಾಮಗಾರಿ ಕೈಗೊಳ್ಳಲು ಪರಿಶೀಲಿಸಲಾಗುವುದು. |
| ಈ) | ಮಂಗಳೂರಿನ ಫುಟ್‌ಬಾಲ್ ಮೈದಾನ ಟರ್ಫ್ ಮೈದಾನವನ್ನಾಗಿ ಮಾರ್ಪಾಡಿಸಲು ಸರ್ಕಾರದ ಮುಂದೆ ಪ್ರಸ್ತಾವನೆ ಇದ್ದು, ಯಾವಾಗ ಕಾಮಗಾರಿ ಪ್ರಾರಂಭಿಸಲಾಗುವುದು; ವಿಳಂಬಗೊಳ್ಳಲು ಕಾರಣಗಳೇನು? | ಮಂಗಳೂರಿನ ಫುಟ್‌ಬಾಲ್ ಮೈದಾನವನ್ನು ಟರ್ಫ್ ಮೈದಾನವನ್ನಾಗಿ ಮಾರ್ಪಾಡಿಸಲು ರೂ.100.00 ಲಕ್ಷಗಳ ಅಂದಾಜು ಪಟ್ಟಿಗೆ ದಿನಾಂಕ: 31.12.2016 ರಂದು ನಿರ್ದೇಶಕರು, ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ, ಇವರು ಆಡಳಿತಾತ್ಮಕ ಅನುಮೋದನೆಯನ್ನು ನೀಡಿ, ರೂ.25.00 ಲಕ್ಷಗಳ ಅನುದಾನವನ್ನು ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ರವರಿಗೆ ಬಿಡುಗಡೆ ಮಾಡಲಾಗಿದೆ. ಈ ಕಾಮಗಾರಿಯನ್ನು ಲೋಕೋಪಯೋಗಿ ಇಲಾಖೆ, ಮಂಗಳೂರು ರವರಿಗೆ ವಹಿಸಲಾಗಿದ್ದು, ಟೆಂಡರ್‌ನ್ನು ಆಹ್ವಾನಿಸಲಾಗಿರುತ್ತದೆ. ಸದರಿ ಟೆಂಡರ್‌ನಲ್ಲಿ ಅತೀ ಕಡಿಮೆ ದರ ನಮೂದಿಸಿರುವ ಬಿಡ್‌ದಾರರು ಶೇ.18ರಷ್ಟು ಹೆಚ್ಚುವರಿ ಮೊತ್ತವನ್ನು ನಮೂದಿಸಿದ್ದು, ಲೋಕೋಪಯೋಗಿ ಇಲಾಖೆಯ ಸೇವಾ ಶುಲ್ಕ ಸೇರಿದಂತೆ ಒಟ್ಟು ರೂ.125.49 ಲಕ್ಷ ಅಗತ್ಯವಿರುವುದರಿಂದ ಹೆಚ್ಚುವರಿ ಅನುದಾನ ಮತ್ತು ಅನುಮೋದನೆಗಾಗಿ ಸರ್ಕಾರದಲ್ಲಿ ಪ್ರಸ್ತಾವನೆ ಸ್ವೀಕೃತವಾಗಿದ್ದು, ಪ್ರಸ್ತಾವನೆ ಸರ್ಕಾರದ ಪರಿಶೀಲನೆಯಲ್ಲಿದೆ. |

ಸಂಖ್ಯೆ: ಯುಸೇಇ 97 ಯುಸೇಭಾ 2018.

(ಡಾ|| ಜಿ. ಪರಮೇಶ್ವರ)
ಉಪ ಮುಖ್ಯಮಂತ್ರಿ.